**ಕರ್ನಾಟಕ ವಿಧಾನ ಪರಿಷತ್ತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 277
ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 09-12-2020
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಬೆಂಗಳೂರು ಪೂರ್ವ ತಾಲ್ಲೂಕು, ಬಸವನಪುರ ಗ್ರಾಮದ ಸ.ನಂ, 26/1 ರಲ್ಲಿರುವ 4 ಎಕರೆ 18 ಗುಂಟೆ ಸರ್ಕಾರದ ಗೋಮಾಳದ ಜಮೀನನ್ನು ಅನಧಿಕೃತವಾಗಿ ನೋಂದಣಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರಂ ಹೋಬಳಿ. ಬಸವನಪುರ ಗ್ರಾಮದ ಸ.ನಂ.26/1 ರಲ್ಲಿನ ಗಣಕ ಪಹಣಿಯಂತೆ,<br>ಒಟ್ಟು ವಿಸ್ತೀರ್ಣ: 8-37 ಎ/ಗು<br>"ಅ" ಖರಾಬು: 3-20 ಎ/ಗು<br>"ಬ" ಖರಾಬು: 0-29 ಗುಂಟೆ<br>ಉಳಿಕೆ: 4-28 ಎ/ಗು<br><br>ಉಳಿಕೆ 4-28 ಎ/ಗು ವಿಸ್ತೀರ್ಣದ ಪೈಕಿ ಶ್ರೀ.ಆರ್.ಕೆ.ಮುತ್ತುಕೃಷ್ಣ ಬಿನ್ ಆರ್.ಕನ್ನಪ್ಪ ಎಂಬುವರಿಗೆ 0-10 ಗುಂಟೆ ಎಂ.ಆರ್.ಹೆಚ್:10/2015-16 ರಂತೆ ವಿಸ್ತೀರ್ಣ ಬದಲಾವಣೆಯಂತೆ ಖಾತೆಯಿದ್ದು, ಉಳಿದ 4-18 ಎ/ಗು ವಿಸ್ತೀರ್ಣಕ್ಕೆ ಶ್ರೀ.ಆರ್.ಚಂದ್ರು ಬಿನ್ ಡಿ.ರಾಮಯ್ಯ ಇವರಿಗೆ ಎಂ.ಆರ್.ಹೆಚ್:04/2016-17 ರಂತೆ ಖಾತೆಯಿರುವುದು ಕಂಡು ಬಂದಿರುತ್ತದೆ. |
| ಆ) | ಈ ರೀತಿ ಅನಧಿಕೃತ ನೋಂದಣಿಯನ್ನು ರದ್ದುಪಡಿಸಲು ಸ್ಥಳೀಯ ಗ್ರಾಮಸ್ಥರು ಜಿಲ್ಲಾಧಿಕಾರಿಗಳಿಗೆ ಮತ್ತು ಆಯುಕ್ತರು, ಬಿಬಿಎಂಪಿ ಇವರುಗಳಿಗೆ ಅರ್ಜಿ ಸಲ್ಲಿಸಿದ್ದರೂ ಯಾವುದೇ ಕ್ರಮ ಕೈಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶ್ರೀ.ಎ.ವೇಲು ಉ॥ ತಂಗವೇಲು ಎಂಬುವವರು ದೂರು ಸಲ್ಲಿಸಿ, ಸದರಿ 4-18 ಎ/ಗು ಜಮೀನಿನ ನೊಂದಣಿಯನ್ನು ರದ್ದುಪಡಿಸಿ, ಸರ್ಕಾರದ ವಶಕ್ಕೆ ಪಡೆಯಲು ಕೋರಿದ್ದರ ಮೇರೆಗೆ ನೊಂದಣಿ ಪತ್ರವನ್ನು ರದ್ದುಪಡಿಸಲು ಜಿಲ್ಲಾಧಿಕಾರಿ ರವರ ವ್ಯಾಪ್ತಿಗೆ ಬರುವುದಿಲ್ಲ. ಆದಾಗ್ಯೂ ದೂರುದಾರರ ಮನವಿಗೆ ಸಂಬಂಧಿಸಿದಂತೆ, ದಿನಾಂಕ:10.06.2020 ರಂದು ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ಇವರಿಗೆ ಪತ್ರ ಬರೆದು, ಸದರಿ ಜಮೀನಿಗೆ ಖಾತೆದಾರರು ಹೊಂದಿರುವ ಹಕ್ಕಿನ ನೈಜತೆ ಬಗ್ಗೆ ಪರಿಶೀಲಿಸಿ, ಮೂಲ ದಾಖಲೆಗಳೊಂದಿಗೆ ವಸ್ತುಸ್ಥಿತಿಯ ವರದಿ ಸಲ್ಲಿಸಲು ಸೂಚಿಸಲಾಗಿರುತ್ತದೆ ಹಾಗೂ ಅದೇ ದಿನದಂದು ಜಂಟಿ ಆಯುಕ್ತರು, ಬಿ.ಬಿ.ಎಂ.ಪಿ ಮಹಾದೇವಪುರ ವಲಯ ಇವರಿಗೆ ಪತ್ರ ಬರೆದು ಸದರಿ ಜಮೀನಿಗೆ ನಕ್ಷೆ ಮಂಜೂರಿ ಮಾಡದೇ ಯಥಾಸ್ಥಿತಿ ಕಾಪಾಡುವಂತೆ ಸಂಬಂಧಪಟ್ಟ ಅಧಿಕಾರಿಗಳಿಗೆ ಸೂಕ್ತ ನಿರ್ದೇಶನ ನೀಡುವಂತೆ ಸೂಚಿಸಲಾಗಿರುತ್ತದೆ. |

| | | |
|---|---|---|
| ಇ) | ಅಕ್ರಮ ನೋಂದಣಿಗಳನ್ನು ರದ್ದುಪಡಿಸಲು ಸರ್ಕಾರದ ಮಾನದಂಡಗಳೇನು? (ವಿವರ ಒದಗಿಸುವುದು) | ನೋಂದಣಿಯಾದ ದಸ್ತಾವೇಜನ್ನು, ಸದರಿ ದಸ್ತಾವೇಜಿಗೆ ಸಂಬಂಧಪಟ್ಟ ಉಭಯ ಪಕ್ಷಕಾರರು ರದ್ದತಿ ಪತ್ರವನ್ನು ಬರೆದುಕೊಟ್ಟು ಸಹಿ ಮಾಡಿ, ಸಂಬಂಧಪಟ್ಟ ಉಪನೋಂದಣಾಧಿಕಾರಿಗಳಿಗೆ ಅಂತಹ ರದ್ದತಿ ಪತ್ರವನ್ನು ನೋಂದಣಿಗೆಹಾಜರುಪಡಿಸಿದ್ದಲ್ಲಿ, ಉಪನೋಂದಣಾಧಿಕಾರಿಗಳು ನಿಯಾಮಾನುಸಾರ ಉಭಯ ಪಕ್ಷಕಾರರು ಒಪ್ಪಿ ಬರೆದುಕೊಟ್ಟಿರುವ ರದ್ದತಿ ದಸ್ತಾವೇಜನ್ನು ನಿಗಧಿಪಡಿಸಿದ ಶುಲ್ಕಗಳನ್ನು ವಸೂಲಾಯಿಸಿ ನೋಂದಣಿ ಕಾಯ್ದೆ 1908 ಮತ್ತು ಇದರಡಿ ರಚಿಸಲಾದ ಕರ್ನಾಟಕ ನೋಂದಣಿ ನಿಯಮಗಳು 1965 ರನ್ವಯ ನೋಂದಾಯಿಸುತ್ತಾರೆ.<br>ಅಕ್ರಮ ನೋಂದಣಿಗೆ ಸಂಬಂಧಿಸಿದಂತೆ ಒಂದು ವೇಳೆ ಉಭಯ ಪಕ್ಷಕಾರರು ರದ್ದತಿ ಪತ್ರವನ್ನು ಬರೆದುಕೊಡದೆ ಇರುವ ಪಕ್ಷದಲ್ಲಿ ಕರ್ನಾಟಕ ನೋಂದಣಿ ನಿಯಮಗಳು 1965ರ ನಿಯಮ 123 ರನ್ವಯ ಹಿಂದೆ ನೋಂದಣಿಯಾದ ದಸ್ತಾವೇಜನ್ನು ರದ್ದುಪಡಿಸುವ ಕುರಿತು ಪತ್ರ ವ್ಯವಹಾರ, ಕಂದಾಯ ಅಧಿಕಾರಿ, ನ್ಯಾಯಾಲಯದಿಂದ ಬಂದಾಗ, ರದ್ದು ಮಾಡಲ್ಪಟ್ಟಿರುವ ಬಗ್ಗೆ Cross Reference ಅನ್ನು ಸಂಬಂಧಪಟ್ಟ ಪುಸ್ತಕದ ಸಂಪುಟದಲ್ಲಿಹಾಗೂ ಸ್ವತ್ತಿಗೆ ಸಂಬಂಧಿಸಿದ ವಿವರಣಾ ಸೂಚಿಯಲ್ಲಿಯೂ ಸಹ ರದ್ದು ಮಾಡಲ್ಪಟ್ಟಿರುವ ಬಗ್ಗೆ ಸಂವಾದಿ ಟಿಪ್ಪಣಿಯನ್ನು (Corresponding Note) ದಾಖಲಿಸಲು ಅವಕಾಶವಿರುತ್ತದೆ. |

**ಸಂಖ್ಯೆ: ಆರ್‌ಡಿ 175 ಎಲ್‌ಜಿಕ್ಯೂ 2020 (ಇ)**

(ಆರ್.ಅಶೋಕ)
**ಕಂದಾಯ ಸಚಿವರು**